# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 01. | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : 1493 |
| 02. | ಮಾನ್ಯ ವಿಧಾನ ಪರಿಷತ್ ಸದಸ್ಯರ ಹೆಸರು | : ಶ್ರೀಮತಿ ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು) |
| 03. | ಉತ್ತರಿಸುವ ದಿನಾಂಕ | : 10-03-2022 |
| 04. | ಉತ್ತರಿಸುವ ಸಚಿವರು. | : ಗೃಹ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಇತ್ತೀಚಿನ ದಿನಗಳಲ್ಲಿ ಮಹಿಳೆಯರೇ ಇರುವ ಮತ್ತು ಒಂಟಿ ಮನೆಗಳ ಮೇಲೆ ಅಪರಿಚಿತರಿಂದ ದಾಳಿ, ಹಲ್ಲೆ ಮತ್ತು ಸರಣಿ ದರೋಡೆಗಳು ಆಗುತ್ತಿದ್ದು ಬಹುತೇಕ ಪ್ರಕರಣಗಳಲ್ಲಿ ಅಸ್ಸಾಮಿಗಳ ಸೋಗಿನಲ್ಲಿರುವ ಬಂಗಾಳಿಗಳೇ ಭಾಗಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುವುದಿಲ್ಲ.<br><br>ಆದಾಗ್ಯೂ ಕೊಡಗು ಜಿಲ್ಲೆಯಲ್ಲಿ ನೆಲೆಸಿರುವ ಹೊರರಾಜ್ಯದವರ ಬಗ್ಗೆ ನಿಗಾವಹಿಸಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br><br>• ಕೊಡಗು ಜಿಲ್ಲೆಯ ಪೊಲೀಸ್ ಠಾಣೆಗಳ ವ್ಯಾಪ್ತಿಯಲ್ಲಿನ ಕಾಫಿ ತೋಟಗಳಿಗೆ/ ಕಟ್ಟಡ/ ಹೋಂಸ್ಟೇ/ರೆಸಾರ್ಟ್ ಕೆಲಸಗಳಿಗೆ ಕೂಲಿ ಕಾರ್ಮಿಕರನ್ನು ನೇಮಿಸಿಕೊಳ್ಳುವ ಸಂದರ್ಭದಲ್ಲಿ ಕಾರ್ಮಿಕರ ಗುರುತಿನ ಚೀಟಿಯನ್ನು ಮತ್ತು ಖಾಯಂ ವಿಳಾಸವನ್ನು ಕಡ್ಡಾಯವಾಗಿ ಪಡೆದು ಭಾವಚಿತ್ರಗಳೊಂದಿಗೆ ನಿರ್ವಹಿಸುವಂತೆ ಮತ್ತು ಪೊಲೀಸ್ ಠಾಣೆಗಳಿಗೆ ದಾಖಲಾತಿಗಳ ಮಾಹಿತಿಯನ್ನು ನೀಡುವಂತೆ ಮಾಲೀಕರಿಗೆ ಸೂಚನೆ ನೀಡಲಾಗಿದ್ದು ಅದರಂತೆ ಕಾರ್ಮಿಕರ ಗುರುತಿನ ಚೀಟಿಯನ್ನು ಮತ್ತು ಖಾಯಂ ವಿಳಾಸವನ್ನು ಪಡೆದುಕೊಂಡು ಪರಿಶೀಲಿಸಲಾಗುತ್ತಿದೆ.<br><br>• ಸದರಿ ಕೂಲಿ ಕಾರ್ಮಿಕರುಗಳು ಭಾರತ ದೇಶದ ಪ್ರಜೆಗಳಾಗಿದ್ದು ಅಸ್ಸಾಂ ಹಾಗೂ ಇತರೆ ಈಶಾನ್ಯ ಮತ್ತು ಉತ್ತರ ಭಾರತದ ರಾಜ್ಯಗಳ ಆಧಾರ್ ಕಾರ್ಡ್ ಮತ್ತು ಮತದಾರರ ಗುರುತಿನ ಚೀಟಿಗಳನ್ನು ಹೊಂದಿರುವುದು ಕಂಡು ಬಂದಿರುತ್ತದೆ.<br><br>• ಕೊಡಗು ಜಿಲ್ಲೆಯಲ್ಲಿ ಅಸ್ಸಾಂ ಹಾಗೂ ಇತರೇ ಈಶಾನ್ಯ ಮತ್ತು ಉತ್ತರ ಭಾರತದ ರಾಜ್ಯಗಳಿಂದ ಸುಮಾರು 8615 ಜನ ಕೂಲಿ ಕಾರ್ಮಿಕರು ಕಾಫಿ ಕುಯ್ಯಿಲಿನ ಸಮಯದಲ್ಲಿ ಬಂದು ಕೆಲಸ ಮುಗಿಸಿ ಕೆಲವರು ವಾಪಾಸ್ಸು ಅವರವರ ರಾಜ್ಯಕ್ಕೆ ತೆರಳಿರುತ್ತಾರೆ. ಕೆಲವರು ಇನ್ನು ಕೆಲಸ |
| ಆ | ಬಂದಿದ್ದಲ್ಲಿ, ಈ ರೀತಿ ಜಿಲ್ಲೆಯಲ್ಲಿ ಅಕ್ರಮವಾಗಿ ಅಸ್ಸಾಮಿಗಳ ಸೋಗಿನಲ್ಲಿ ನೆಲೆಸಿರುವ ಬಂಗಾಳಿಗಳನ್ನು ಗುರುತಿಸಿ ಅವರ ವಿರುದ್ಧ ಇದುವರೆಗೆ ಏನು ಕ್ರಮ ಕೈಗೊಳ್ಳಲಾಗಿದೆ; | |

| | | |
|---|---|---|
| | | ಮಾಡಿಕೊಂಡು ಇಲ್ಲಿಯೇ ಇರುತ್ತಾರೆ.<br>• ಇವರುಗಳು ವಾಸಿಸುವ ಸ್ಥಳಗಳಲ್ಲಿನ ಆಯಾ ಠಾಣಾ ವ್ಯಾಪ್ತಿಯ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳು ನಿಗಾ ವಹಿಸಿದ್ದು, ಕಾನೂನು ಬಾಹಿರ ಕೃತ್ಯಗಳು ಎಸಗಿದ್ದಲ್ಲಿ ಅವರುಗಳ ವಿರುದ್ಧ ಕಾನೂನು ರೀತ್ಯಾ ಕ್ರಮ ಜರುಗಿಸಲಾಗುವುದು. |
| ಇ | ಈ ಪ್ರಕರಣಗಳನ್ನು ತಡೆಯಲು ಮತ್ತು ನಿಯಂತ್ರಿಸಲು ಸರ್ಕಾರ ಕೈಗೊಂಡಿರುವ ಮುಂಜಾಗ್ರತಾ ಕ್ರಮಗಳೇನು; | ಕೊಡಗು ಜಿಲ್ಲೆಯಲ್ಲಿ ಇತ್ತೀಚಿನ ದಿನಗಳಲ್ಲಿ ಒಂಟಿ ಮಹಿಳೆಯರು ವಾಸ ಮಾಡಿಕೊಂಡಿರುವ ಮನೆಗಳಲ್ಲಿ ಅಪರಾಧ ಕೃತ್ಯಗಳನ್ನು ತಡೆಗಟ್ಟುವ ಸಲುವಾಗಿ ಜಿಲ್ಲೆಯ ಎಲ್ಲಾ ಪೊಲೀಸ್ ಠಾಣಾ ವ್ಯಾಪ್ತಿಗಳಲ್ಲಿ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ. |
| ಈ | ಸದರಿ ದರೋಡೆ ಪ್ರಕರಣಗಳ ಹಿನ್ನಲೆಯಲ್ಲಿ ಜಿಲ್ಲೆಯಲ್ಲಿ ಸೂಕ್ತ ಭದ್ರತಾ ವ್ಯವಸ್ಥೆ ಹಾಗೂ ಹೆಚ್ಚಿನ ಮಟ್ಟದ ಗಸ್ತು ವ್ಯವಸ್ಥೆ ಕಲ್ಪಿಸ ಲಾಗಿದೆಯೇ? (ವಿವರ ನೀಡುವುದು) | 1] ಪ್ರತೀ ಠಾಣಾ ವ್ಯಾಪ್ತಿಯಲ್ಲಿ ಒಂಟಿ ಮಹಿಳೆಯರು ವಾಸಿಸುತ್ತಿರುವ ಮನೆಗಳ ಮಾಹಿತಿ ಸಂಗ್ರಹಿಸಿ ಅವರ ಮನೆಗಳಿಗೆ ಬೀಟ್ ಪಾಯಿಂಟ್ ಪುಸ್ತಕ ಇಡಲಾಗಿರುತ್ತದೆ.<br>2] ಗ್ರಾಮ ಗಸ್ತಿಗೆ ಸಿಬ್ಬಂದಿಯವರನ್ನು ನೇಮಿಸಿ ಕಳುಹಿಸುವಾಗ ಸಿಬ್ಬಂದಿಯವರು ಅವರ ಗಸ್ತಿನ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ಒಂಟಿ ಮಹಿಳೆಯರ ಮನೆಗಳಿಗೆ ಭೇಟಿ ನೀಡಿ ಅವರ ಸಮಸ್ಯೆಗಳ ಬಗ್ಗೆ ವಿಚಾರಿಸಿಕೊಂಡು ಬೀಟ್ ಪುಸ್ತಕದಲ್ಲಿ ನಮೂದಿಸಿಕೊಳ್ಳುವಂತೆ ತಿಳುವಳಿಕೆ ನೀಡಲಾಗಿರುತ್ತದೆ.<br>3] ಒಂಟಿಯಾಗಿ ವಾಸಿಸುತ್ತಿರುವ ಮಹಿಳೆಯರ ಮನೆಗಳಿಗೆ ತೆರಳಿ ಅವರಿಗೆ ಬೀಟ್ ಸಿಬ್ಬಂದಿಯವರ, ಪೊಲೀಸ್ ಠಾಣೆಯ, ಸಂಬಂಧಪಟ್ಟ ಠಾಣೆ/ಪಿ.ಎಸ್.ಐ/ಪಿ.ಐ ರವರ ಹಾಗೂ ದೂರವಾಣಿ ಸಂಖ್ಯೆಗಳನ್ನು ನೀಡಲಾಗಿದ್ದು ಹಾಗೂ ಅವರುಗಳ ದೂರವಾಣಿ ಸಂಖ್ಯೆಯನ್ನು ಪಡೆದುಕೊಳ್ಳಲಾಗಿರುತ್ತದೆ.<br>4] ಒಂಟಿಯಾಗಿ ವಾಸಿಸುತ್ತಿರುವ ಮಹಿಳೆಯರು ಅವರ ಮನೆಗಳಿಗೆ ಸಿ.ಸಿ ಟಿವಿ ಅಳವಡಿಸಿಕೊಳ್ಳಲು ಸೂಕ್ತ ತಿಳುವಳಿಕೆ ನೀಡಲಾಗಿರುತ್ತದೆ.<br>5] ಒಂಟಿಯಾಗಿ ವಾಸಿಸುತ್ತಿರುವ ಮಹಿಳೆಯರಿಗೆ ಅವರ ಮನೆಗಳಲ್ಲಿ ಕೆಲಸಕ್ಕೆ ಯಾರನ್ನಾದರೂ ಇಟ್ಟುಕೊಂಡಿದ್ದರೆ ಅವರ ಬಗ್ಗೆ ಮಾಹಿತಿ ಮತ್ತು ಅವರ ಗುರುತಿನ ಚೀಟಿಯನ್ನು ಪಡೆದು ಠಾಣೆಗೆ ನೀಡುವಂತೆ ತಿಳಿಸಲಾಗಿರುತ್ತದೆ. |

| | | |
|---|---|---|
| | | 6] ಒಂಟಿಯಾಗಿ ವಾಸಿಸುತ್ತಿರುವ ಮಹಿಳೆಯರು ಯಾವುದಾದರೂ ಲೈಸೆನ್ಸ್/ಜಮ್ಮಾ ಬಂಧೂಕು ಹೊಂದಿದ್ದರೆ ಅವುಗಳ ಮಾಹಿತಿ ಪಡೆದುಕೊಳ್ಳಲಾಗಿದ್ದು ಹಾಗೂ ಅನಿವಾರ್ಯ ಸಂದರ್ಭದಲ್ಲಿ ಅವುಗಳನ್ನು ಉಪಯೋಗಿಸುವ ಬಗ್ಗೆ ಅವರಿಗೆ ಸೂಕ್ತ ತಿಳುವಳಿಕೆ ನೀಡಲಾಗಿರುತ್ತದೆ.<br>7] ರಾತ್ರಿ ಗಸ್ತಿಗೆ ಸಿಬ್ಬಂದಿಯವರನ್ನು ನೇಮಿಸುವಾಗ ಅವರವರ ಬೀಟ್ ವ್ಯಾಪ್ತಿಯಲ್ಲಿರುವ ಒಂಟಿ ಮಹಿಳೆಯರು ವಾಸಿಸುವ ಮನೆಗಳಿಗೆ ಭೇಟಿ ನೀಡಿ ಪರಿಶೀಲಿಸಿಕೊಂಡು ಪಾಯಿಂಟ್ ಪುಸ್ತಕಗಳಲ್ಲಿ ಸಹಿ ಮಾಡುವ ಬಗ್ಗೆ ಸೂಕ್ತ ತಿಳುವಳಿಕೆ ನೀಡಲಾಗಿದ್ದು ಹಾಗೂ ನೈಟ್ ರೌಂಡ್ಸ್ ಅಧಿಕಾರಿಗಳು ಸಹ ಭೇಟಿ ಮಾಡಿ ಪರಿಶೀಲಿಸಲಾಗುತ್ತಿರುತ್ತದೆ.<br>8] ಕೊಡಗು ಜಿಲ್ಲೆಯಲ್ಲಿ ERSS-112 [Emergency Rescue System Service] ತುರ್ತು ಸ್ಪಂದನಾ ವಾಹನ ವ್ಯವಸ್ಥೆ ಜಾರಿಯಲ್ಲಿದ್ದು, ದಿನದ 24 ಗಂಟೆಯೂ ಕರ್ತವ್ಯ ನಿರ್ವಹಿಸಲಾಗುತ್ತಿರುತ್ತದೆ. ಜಿಲ್ಲೆಯಲ್ಲಿ ಒಟ್ಟು 560 ಗ್ರಾಮಗಳಲ್ಲಿ ಗ್ರಾಮ ಗಸ್ತು ಕರ್ತವ್ಯಕ್ಕೆ ಸಿಬ್ಬಂದಿಗಳನ್ನು ನೇಮಿಸಿ ಕರ್ತವ್ಯ ನಿರ್ವಹಿಸಲಾಗುತ್ತಿರುತ್ತದೆ. |

**ಕಡತ ಸಂಖ್ಯೆ : ಹೆಚ್‌ಡಿ 18 ಪಿಸಿಕ್ಯೂ 2022**

(ಆರಗ ಜ್ಞಾನೇಂದ್ರ)
ಗೃಹ ಸಚಿವರು